# ಮೂರ್ತಿ

ಮತ್ತು

# ಕಾಮಕಸ್ತೂರಿ



ಅಂಬಿಕಾತನಯದತ್ತ

ಪ್ರಕಾಶನದ ಶ್ರೇಯಸ್ಸು ಇಬ್ಬರು ಗೆಳೆಯರದು

—ಅಂಬಿಕಾತನಯದತ್ತ

---

ಮುದ್ರಕರು: ಬಳವಂತ ನಾರಾಯಣ ಬಾಗಲವಾಡಿ
ಮೋಹನ ಮುದ್ರಣಾಲಯ, ಧಾರವಾಡ
ಪ್ರಕಾಶಕರು: ಗೋವಿಂದ ವೆಂಕಟೇಶ ಚುಳಕಿ
ಸಾಧನಕೆರೆ, ಧಾರವಾಡ

# ಕವನ ಸಂದರ್ಭ

೧೯೩೪ ರಲ್ಲಿ ಒಮ್ಮೆ ತತ್ತ್ವಚಿಂತನೆಯಲ್ಲಿದ್ದಾಗ್ಗೆ "ಆತ್ಮವು ಒಂದು ಕಲ್ಲು; ಬರಿ ಉಂಟು" ಎನಿಸಿತು. ಮುಂದೊಮ್ಮೆ ಸಾಂಖ್ಯ ಯೋಗ ಕುರಿತು ಓದುವಲ್ಲಿ 'ದೃಶದವತ್' ಎಂಬ ಮಾತು ಕೈವಲ್ಯ ಬೋಧ ವಿಚಾರದಲ್ಲಿ ಬಂದಿತು. ಚಮತ್ಕೃತನಾದೆ. ಇನ್ನೊಮ್ಮೆ ಇತಿಹಾಸದರ್ಶನವನ್ನು ಪರ್ಯಾಲೋಚಿಸುವಾಗ ಪಾಷಾಣ ಮೂರ್ತಿಯ ವೈಭವವೆಲ್ಲ-ಯಾರದೋ ಕನಸು, ಯಾರದೋ ಕಲೆ, ಯಾರದೋ ಭಾವ, ಏನೋ ಲೀಲೆ ಎಂದು ಧ್ವನಿತವಾಯಿತು. ನನ್ನದೂ ಹಾಗೇ ಅಲ್ಲವೇ ಎಂದು ತೋಚಿತು. ಬಾಳಿನ ಒಳುಗತೆಯು ಚಿರಂತನ ಚಿತ್ರ—ಈ ಮೂರ್ತಿಜೀವನ ಎಂದು ನೆಲೆಗೊಂಡಿತು ಎದೆಯಲ್ಲಿ.

೧೯೩೮ ರಲ್ಲಿ ಗೆಳೆಯ ಗೋಕಾಕರವರೊಡನೆ ಸಂವಾದ ನಡೆದಾಗ ಇದನ್ನೆ ದೃಷ್ಟಾಂತವಾಗಿ ಹೇಳಿದೆ. ೧೯೫೧ರಲ್ಲಿ ಅವರು ತಮ್ಮೊಂದು ಕವನದಲ್ಲಿ ಇದನ್ನು ಕಹಿಯಾಗಿ ಬರೆದರು. ಸಮರಸರುಚಿರವಾದ ಈ ರೂಪ ಹೀಗೆ ಮೂಡಿಸಬಹುದೇ ? ಎಂದೆ; ಅದೇ ವರುಷ ಮೇ ತಿಂಗಳಲ್ಲಿ ಕವನದ ಹೊಳಹು ಹಾಕಿ ೨ ಭಾಗ ಬರೆದೆ. ಒಂದು 'ಗರಿ'ಯಲ್ಲಿ ಬೆಳಕು ಕಂಡಿತು. ಮುಂದೆ ಜಯಕರ್ನಾಟಕದ ಕೋಲಾಹಲದಲ್ಲಿ ಗುಂಪಿನ ಮಂಗಳವೆತ್ತಿದಾಗ ೪ ಭಾಗ ಬರೆದೆ. ೧೯೫೫ರ ಆದಿಯಲ್ಲಿ. ಮುದ್ರಣೆಗೆ ಸಿದ್ಧಗೊಳಿಸುವಾಗ ನಾಲ್ಕಾರು ಕಡೆಗೆ ತಿದ್ದಿದ್ದೇನೆ, ಎಂಟು ಹತ್ತು ಸಾಲು ಸೇರಿಸಿದ್ದೇನೆ. ಈಗಿದ್ದ ಮೂರ್ತಿ ಹೀಗಿದೆ.

ಕವನದ ವಾಸ್ತುವಿನ್ಯಾಸದ ಬಗ್ಗೆ ಎರಡು ಮಾತು ಹೇಳ ಬಹುದು. ಮೊದಲ ಮತ್ತು ಕೊನೆಯ ಅಷ್ಟಷಟ್ಪದಿಗಳು ಮುಂಬಲ ಬೆಂಬಲದಂತಿವೆ ಕವನಕ್ಕೆ. ಕವನದ ಮೊದಲುಭಾಗವಾದ 'ಅಚಿಂತ್ಯ'ವು ರೂಪಕಾನ್ಯೋಕ್ತಿಯ ತತ್ತ್ವಮುಖವಾಗಿದೆ. 'ಕೊನೆಯ ಹಾಡು' ಭಾವಫಲ. ಅಚಿಂತ್ಯ ಲೀಲೆಯಲ್ಲಿ ಸಂವೇದನಾಗಮ್ಯವಾದುದು—

'ರಸವೆ ಜನನ
ವಿರಸ ಮರಣ
ಸಮರಸವೇ ಜೀವನಾ'

ಇಷ್ಟೆ! ಉಳಿದ ಭಾಗಗಳ ಪರಿಪಾಕಕ್ರಮವು ಪರ್ವ ಪರ್ವಕ್ಕೂ ಸ್ಫುಟವೇ ಆಗಿದೆ ಎಂದು ನಾನು ಭಾವಿಸಿದ್ದೇನೆ.

ಇನ್ನುಳಿದುದು ಸಹೃದಯ ಹೃದಯ ನಿಕಷದಲ್ಲಿ ಬಣ್ಣದೋರ ಬೇಕು. ಕಾಲದಲ್ಲಿ ತೇಲಬೇಕು. ಅದು ನಿಜವಾದ ಪರೀಕ್ಷೆ. ತೇಜ ವೆಷ್ಟೊ ಬೂದಿಯೆಷ್ಟೊ ಯಜ್ಞದಲ್ಲಿ ತಿಳಿಯಬೇಕು.

**ದ. ರಾ. ಬೇಂದ್ರೆ**

ಮೂರ್ತಿ

# ಪ ರಿ ವಿ ಡಿ



*

# ಪ್ರಳಯ-ಸೃಷ್ಟಿ

ಹೊಗೆಮೋಡ ಹಿಂಜಿ, ಕಣ್ಮರೆಯಾಗುವಂತೆ, ನೆನೆ-
ಸಿದ ರೂಪ ಹುಡಿಯಾಗುತಿದೆ; ಮಬ್ಬು ಕವಿದು ಬರು-
ತಿದೆ; ಸ್ವಪ್ನಲೋಕದೊಳು ಆಕಾರ ಪ್ರಳಯವಿರು-
ವಂತೆ, ತುಂಬಿದೆ ನಿರಾಕಾರ ತಮ. ಚಿತ್ತಘನ
ನಿಬಿಡವನ; ಹೊತ್ತು ಗೊತ್ತಿಲ್ಲ; ಮಿಸುಗುಡದೆ ಮನ
ತನ್ನ ನುಂಗಿದೆ ತಾನು, ಯಾವ ಲೋಕವೊ ಇದಿರು ?
ಸೃಷ್ಟಿಯಿಲ್ಲದ ದೃಷ್ಟಿ, ಚಿತ್ರ ! ನಿಶ್ಚಿತ್ರ. ಇರು
ವೆನೊ ನಾನು ? ಇಹುದೇನು ? ಒಳಬಯಲ ನಿರ್ಜನ !

ಮರಣ ಮೂರ್ಛಿತ ದೇಹಕುಸಿರು ಹುಟ್ಟಿದ ಹಾಗೆ
ಸ್ಪಂದಿಸುವದಿದೊ ತಮವು; ದಿವ್ಯಶಾಲಗ್ರಾಮ
ಶಿಲೆಯೊಳುದಿಸಿದ ಕೊಳಲ ಕೃಷ್ಣಮೂರ್ತಿಯ ಮಧುರ
ಮುರಲಿನಾದವು ಕಣದಗಣ ಕುಣಿಸುತಿದೆ ಸೋಗೆ
ನವಿಲಂತೆ, ಸುತ್ತು ಕಣ್ಣೋ ಕಣ್ಣು ! ಚಿರವಿಧುರ
ಪೂರ್ವವಧು ಪಡೆದಂತೆ, ಮನವೆ ಮಂಗಲಧಾಮ.



## ನಿವೇದನ

ತಾಯಿಯ ಮತ್ತು ಗೆಳೆಯರ

ಹೃದಯವೇದಿಕೆಯಲ್ಲಿ

# ಮೂರ್ತಿ

## ಅಚಿಂತ್ಯ

೧

ನಿಜವ ಕಂಡವರಿಲ್ಲ,
ನಿಜ ಕಾಣುವಂತಿಲ್ಲ,
ನಿಜವೇನು ಮಳಲ ಹುಡಿಗಿಂತ ಕೀಳೇ?
ನಿಜವ ಕಂಡಿಹೆನೆಂಬ
ಕಣ್ಣ ಜಂಭದ ಹುಂಬ!
ಮಳಲ ಹುಡಿ ಗುಟ್ಟೇನು ಕಣ್ಣ ಕೂಳೇ?

೨

ಕಣ್ಣ ಕದಿರಿನ ಕೈಯ
ನಿಲುಕದಾಚೆಯ ಮೈಯ
ನಿಜಕೆ ತಕ್ಕೆಯಬಿದ್ದ ಮಾತಮಲ್ಲ!
ನಿಜದ ನೆಲೆ ನಿಜಕಿಲ್ಲ—
ಇದನು ಬಲ್ಲವ ಬಲ್ಲ,
ಅದರ ತಿರುಳನೆ ತಿಂದೆಯೊಂಜೆಯಲ್ಲ!

೩

ಮಳಲಹುಡಿಯೊಂದು ಹಿಡಿ
ನಿನ್ನ ಹಿಡಿಯಲ್ಲಿ ಹಿಡಿ,
ಆದರ ಕತೆಯೇನು ? ಗತಿಯೇನು ? ಬಾಳು ?
ಯಾವ ತ್ರೇತಾಯುಗದ
ಹಾಳಾದ ಹಳೆ ಜಗದ
ತಳಕು ಬೆಳಕಿಲ್ಲಿ ಮಡಿದಿಹುದು ಹೇಳು !

೪

ಹರಿ ಮೇಲು, ಹರ ಮೇಲು,
ಬರಿಯ ಬರಹದ ಸಾಲು,
ಕಾಗುಣಿತ ತಿದ್ದಿಡಲು–ಬಳ್ಳಿ ಬದುಕೇ ?
ಎರಡೆಂದು–ಅದು ಒಂದು,
ಎರಡೊಂದು ಎಂದೆಂದು,
ಅಂಕಿಮಗ್ಗಿಯು ಕುಣಿತ ಬೇಕೆ ಇದಕೆ?

೫

ಕಂಡಕಂಡಹಾಗೆ ನವ್ಯಭವ್ಯದಿವ್ಯವಾಗಿ ತೆರೆವೆ
ಓ ಅದೃಷ್ಟ ಓ ಅದೃಷ್ಟ ಓ ಅದೃಷ್ಟವೇ !
ಅಮೃತಜೀವಕೆಡೆಯ ಕೊಡುವಸಂತಶಾಂತ ಜೀವಕಾಂತ !
ಓ ಅಚಿಂತ್ಯ ಓ ಅಚಿಂತ್ಯ ಓ ಅಚಿಂತ್ಯವೇ !

ಓಂ ಸ್ವಸ್ತಿ

# ಬಾಳು

ನೆಲದ ಹೊಟ್ಟೆ ಬದುಕ ನೋಡು—
ಗಟ್ಟಿಗಲ್ಲು ಹಿಟ್ಟುಮಟ್ಟಿ
ಪದರು ಗುಂಡು ದುಂಡಿ ಬಂಡೆ,
ಮಟ್ಟಿಮಣ್ಣು ವಿವಿಧ ಬಣ್ಣ
ಮಣಿಯುಮಣಿಯು ಕಣಿಯುಕಣಿಯು
ಗುಡ್ಡ ಮೊರಡಿ ಒಡ್ಡು ಸಾಲು.

ಧರೆಯು ವಸುಂಧರೆಯು ಬದುಕ
ನೋಡು–ಹಳ್ಳಹೊಳೆಯು, ಝರಿಯು
ಪರಿಯು ಸೆಳವು ಹೊಳವು ಹೊಳವು
ನುಣುಪು ರೂಪುಗೊಡುತಲಿಹುದು.

ಕಲ್ಲಮೈಯು ಮಿರುಗು ಬೆರಗು
ತಾಯಿನೆಲದ ಮೊಲೆಯು ಜಲದ,
ತಾಳಿಕೊಳುವ ಎದೆಯು ಹದದ

ನೋವ ಕಾವ ಬೆಂಕಿಯುರಿಯು
ನುಂಗಿ ನೀರು ಕುಡಿದು, ನೊಂದು
ಬೆಂದು ಕರಗಿ ಅರಗಿ ಮಿಸುಗಿ
ಮಿಣುಕಿ ಮಿಂಚಿ ಹೊಗರು ಹೊಮ್ಮಿ

ಗಾಳಿಯುಂಡು ಬಲಿತು ಬಳೆದು
ಗಟ್ಟಿಗೊಂಡ ಗಂಡುಪಿಂಡ
ಬುವಿಯ ಬಸುರಿನಲ್ಲಿ ಬಂದು
ಮನೆಗೆ ಗುಡಿಗೆ ಮೈಯಕೊಟ್ಟು

ಹೆಣ್ಣಿಗೊಂಡು ಬೆಡಗನಿಟ್ಟು
ಕಣ್ಣಿಗೊಂಡು ಗೊಂಬೆಯಾಗಿ
  ಸಿಂಗರಿಸಿತು ಬಯಲನು—
  ನೋಡು ಕಲ್ಲನೆಲೆಯನು!

# ಅರಸು ಕನಸು

ಅರಸು ಮನಸು—ಅರಸು ಕನಸು;
ದಿನದ ಜನದ ಮನದ ಬನದ
ಹಿಗ್ಗ ಸುಗ್ಗ ಹರುಹಿ, ಆವರ
ಸಲಿಪಿನೊಲುಮೆ ಬನದ ಪಿಕದ
ಕುಕಿಲು ದಿಸೆಯ ಮುಟ್ಟಿ ತಷಹಿ
ಜಗದ ಮೊಗದ ಮೊಗ್ಗ ಹೂತು
ನೆಲವೆ ಅರಸು ತೋಟವಾಗಿ
ಮೆರೆಯಬೇಕು.—ಸೂರು ಕೈಯ
ಚಳಕ ಕುಸುರು ಹಸಿರುಮುರಿವ
ಬಳ್ಳಿವಳ್ಳಿಯಾಗಿ ಹಬ್ಬಿ
ಕೋಟಿ ಕಣ್ಣ ಕಣವು ಕಟ್ಟಿ
ಗುಡಿಯು ಹುಟ್ಟಿ, ಅದರ ಕಳಸ
ಮುಗಿಲ ಮುಟ್ಟಿ ಮೆರೆಯಬೇಕು.—
ಅದರ ಗರ್ಭದಲ್ಲಿ ಚೆಲುವ
ಬಿಂಬವೊಂದು ನೆಲಿಸಿ ನಿಂತು

ಮಳೆಯು ಮಾಗಿ ಚಳಿಯು ಆಗಿ
ಅದುವು ಚಳಿತು ಸುಗ್ಗ ಬಿಗಿತು
ಬಿಸಿಲ ಹೂವು ಅರಳಿ, ಮರಳಿ
ಹಗಲು ಇರುಳು ಮಗ್ಗಲಾಗಿ
ಹೊತ್ತು ಹೊರಳಿ ಉರುಳುತಿರಲು
ಚಿಕ್ಕೆಗಣ್ಣ ಮುಚ್ಚಿ ತೆರೆದು
ಕದ್ದು ಮುಚ್ಚಿ ನೋಡುತಿರಲು—

ಈ ಬಿಂಬ ಸೊಬಗು ಎಂಬ
ತನ್ನ ಆ ವಿಶಾಲ ಜಾಲ
ದಲ್ಲಿ ಪಾರಜೀವ ಹಕ್ಕಿ
ಹಿಡಿದು ಸಾಕಿ ಮುದ್ದಸುಣಿಸಿ
ಮುಚ್ಚುಕುಡಿಸಿ ಸಚ್ಚುಮಾತ
ಕಲಿಸಿ, ಕುಣಿಸಿ, ದಣಿಸಿ, ತಣಿಸಿ,
ಮತ್ತೆ ಹತ್ತು ದಿಕ್ಕ ತೋರಿ
ದಾರಿ ಕಂಡಕಡೆಗೆ ಹಾರಿ
ಹೋಗಿರೆಂದು ಹಾರಬಿಡಲಿ.

ನುಸುವ ಮನವು ಹರುಷಪಡಲಿ—
ಎಂಬ ಬಯಕೆ ತುಂಬುಗೊಂಡು,
ಆಸೆ ಒಲಿತು, ಕನಸ ಕಲೆತು,
ಅರಸು—ಮನಸನೊಲಿಸಿತು
ಜೀವನದಲಿ ನೆಲೆಸಿತು.

# ಶಿಲ್ಪಿ

ಅರಸನಾಜ್ಞೆ ತಲೆಯೊಳಿರಿಸಿ
ಶಿಲ್ಪಿ ತಂದ ಕಲ್ಲನರಸಿ.

ಜನ್ಮ ಸಫಲವಾಗುವಂಥ –
ಪೂರ್ವ ನಿಮಿಷ ಬಂದಿತೆಂದು
ಭಾವ ಜೀವವನ್ನು ತುಂಬಿ
ಸೂಸಿಹರಿಯುವಂತೆ ಕಣ್ಣ
ಕೋಟಿ ಹರಿಯೆ, ಮೈಯು ಪುಲಕ
ಪುಲಕವಾಗೆ, .. .. .. .. ..

ಶಿಲ್ಪಿ ತನ್ನ ಕಲ್ಲಿನಲ್ಲಿ
ಜೀವರೂಪ ಹಡೆಯಲೆಂದು
ಅಣಿಗೊಳಿಸಿದನುಳಿಯನು .. .. .. ೧

ಉಳಿಯು ಕಲ್ಲನೊರೆಯುತಿತ್ತು,
ಒಡನೆ ಬೀಜ ಬೀಳುತಿತ್ತು,
ಮೊಳಕೆ ಒಡನೆ ಮೂಡುತಿತ್ತು.

ಇಂದ್ರಜಾಲದಿಂದ ಹುಟ್ಟಿ
ಬಂದ ಬಂದ ಮಾವು ಎನಿತು
ಚಂದ! ಏನು ಚಂದ! ಸಫಲ
ವಾಗುವಂತೆ ಬೆಳೆಯುತಿತ್ತು. ೨

ತಾನು ಕಂಡ ಚೆಲುವ ಚೆಲುವು
ತಾನೆ ರೂಪರೂಪವಾಗಿ
ಮನದ ನಯನ ನಲಿಯುತಿತ್ತು.
ತಾತ ತನ್ನ ತನಯನನ್ನೆ
ಕದ್ದು ಕಂಡು 'ಏನು ಮುದ್ದು!'
ಎಂದು ತಣಿದುಕೊಂಡಹಾಗೆ—
ನೆನೆದ ನೆನೆಪ ಕಾವಿನಿಂದ
ಮನದ ಮಯಣ ನೀರು ಹೊಂದಿ
ಚಿತ್ತದಲ್ಲಿ ಮುದ್ರಿಸಿದ್ದ
ಅಚ್ಚಿನಲ್ಲಿ ಎರಕಹೊಯ್ದು
ಚಿತ್ತಜನ್ಮನಾದಸಂಗ
ಅಂಗವನ್ನು ಪಡೆದ ಭಂಗ
ಭಂಗಿಯಲ್ಲಿ ನಿಂತಹಾಗೆ
ಅತಿ ವಿಚಿತ್ರವಾದ ಚಿತ್ರ
ಸ್ಮೃತಿ ತಾಳಿ ಬಂದಿತು. .. .. .. ೩

ಬಿಸಿಲು ಬೇಗೆಯಿಂದ ಬೆಂದ
ನೆಲವ ಹಣಿಸಿ ತಣಿಸಲೆಂದು
ಮರುಗಿ ವೃಷ್ಟಿಗಾಗಿ ಎರಗಿ
ಬಂದ ನೀಲಮೇಘ ಮಿಂಚಿ-
ನಿಂದ ಮೆರಗಿ ತೋರುವಂತ

ಶಿಲ್ಪಿ ತಾನು ಕಂಡ ಕೃಪಾ-
ದೃಷ್ಟಿಯನ್ನು ಕಂಡರಿಸಿದ,
ಕಂಡರಿಸಿದ, ಕಂಡರಿಸಿದ,—
ಕಂಡಹಾಗೆ ನಡುಗಿ ನಡುಗಿ,

ಬೆವತು, ಬಣ್ಣಗೆಟ್ಟು, ಜೀವ–
ರಸವ ಹಿಂಡಿದಂತೆ ಕಣ್ಣು
ಕರೆಯೆ, ಮಾತು ಬರದೆ, ಬಾಯಿ
ಬಿಟ್ಟು, ಕಣ್ಣುಬಿಟ್ಟು, ಮೈಯು
ಬಿಟ್ಟು, ಪ್ರಾಣಬಿಟ್ಟು, ಹಾರಿ–
ತೇನೊ, ಆರಿತೇನೊ ಜೀವ —
ತುಂಬ ಹಾಗೆ, ಸಂತ ಹಾಗೆ
ಶಿಲ್ಪಿ ದೇಹವಿಟ್ಟನು . . . . . . . . ೪

# ಮೂರ್ತಿ

ಹಾಸದೊಂದು ಹಸೆಯ ಮೇಲೆ
ರಾಸಲೀಲೆ ಎಸೆಯುವಂತೆ,
ಹಲವರೊಲವಿಗಾಗಿ, ಕೆಲಕೆ,
ಬಲಕೆ, ಎಡಕೆ, ಒಲೆದ ಬಂದೆ
ಮೊಗವೆ–ಸೊಗವೆ ಸಾವಿರಾರು
ಭಾವಗಳನು ನಟಿಸುವಂತೆ,—
ಸುತ್ತ ನೆರೆದ ರಮಣಿಮಣಿಯ
ರೊಂದಿ ಸಮೊದ ಮಾಲೆಯಲ್ಲಿ
ಮೆರೆವ ಹೃದಯ ಪದಕದಂತೆ,—
ಮಿಂಚಿನಿಂದ ಬರೆದ ರಂಗ
ವಲ್ಲಿ ಸುಳುಹಿನಲ್ಲಿ ಹುದುಗಿ
ಹೊಳೆವ ರಂಗನೊಂದು ಪಾಂಗಿ
ನಂತೆ ಮೆರೆಯುತಿಹುದು ರೂಪ.

ಮುಟಿದ ಸುಖವ ಬಣ್ಣಿಸುವರೆ
ಇದರ ಸಮ್ಮುಖಕ್ಕೆ ನಿಂತು
ಇದನು ಓತು ನೋಡಬೇಕು;
ನಂದನಕ್ಕೆ ನಗೆಯು ಮೇಲು
ಸಾಲು ತೋರುವಂತೆ ದಂತ
ಪಂಕ್ತಿ ತೋರದಂತೆ ಅಧರ
ದಲ್ಲಿ ಮೆರೆವ ಮಧುರ ಹಾಸ;
ಬೆಟ್ಟವದಿರಬಹುದು ಇದರ
ಬೊಟ್ಟು ಅಳುಕಲರಿಯದೆಂಬ

ತೆರದ ನಿಲುವು – ಭೂಮಿದೇವಿ
ಗೊಂದು ಮುದ್ದುಕೊಡುವ ಹಾಗೆ
ಎಸಕದಿಂದ, ಮೋಹಪಾಶ
ವನ್ನು ಸುತ್ತಲೆಸೆಯುತಿತ್ತು;
ಅಡಿಯ ಕೀಳದಿದ್ದರೇನು ?
ಇದುವೆ ಬಂದೆ ಇಗೋ ಬಂದೆ
ಎಂಬ ತವಕದಿಂದ ತುಂಬಿ
ತುಳುಕುವಂಥ ಮೈಯ ಮಾಟ,
ಹಸಿದು ಬಂದ ಜನಕೆ ಇಸಿದು
ಕೊಳ್ಳಿ, ಕೊಳ್ಳಿ, ಒಸೆದ ವರವ
ಎನ್ನುವಂತೆ ನೀಡಿದಂಥ
ವರದ ಹಸ್ತ, ಬೆರಗು ಬೇಡ
ಎನ್ನುವಂಥ ಅಭಯಹಸ್ತ
ಮೂರ್ತಿಗಿರುವ ಒಡವೆ ವಸ್ತ್ರ.

ನೋಡಲಾಗ, ಒಂದು ಕಲ್ಲು—
ಒಜನೊಳಗೆ ಸುಳಿದ ತೇಜ
ಕಳೆಯ ರೂಪದಲ್ಲಿ ಮೂಡಿ
ಜೀವಪಡೆದ ಬಿಂಬವನ್ನು
ಇಲ್ಲಿ ಒಡಲ ಪಡೆದು, ಹಡೆದು,
ಮತ್ತೆ ಕಂಡ ಕಣ್ಣು ದಾಟಿ
ಮಸದೆ ನಾಟಿ ನಿಂತಿತು.

# ಕೀರ್ತಿ

ಗಣನೆಯಿಲ್ಲದನಿತು ಜನವು
ಇದರ ರೂಪ ಗುಣಕೆ ಸೋತು
ಭಕ್ತರಾಗಿ, ಹೃದಯದಲ್ಲಿ
ಮತ್ತೆ ಇದನು ಎತ್ತಿ ಇಟ್ಟು,
ಮುಕ್ತರಾದರಿಲ್ಲಿ. ಕೆಲರು
ಮುಕ್ತಕಂಠದಿಂದ ಕೊಂಡು
ಕೊನೆದು ಅದನೆ ನೆನೆದು ರಸಸ-
ರಸ್ಸಿನಲ್ಲಿ ಮಿಂದು ಸದಯ
ರಾದರಿಲ್ಲಿ. ಹಲರು ತಮ್ಮ
ನೆಲೆಯ ದೊರೆಯದೆದೆಯ ಒಲುಮೆ
ತೊಲೆಗೆ ಇಡುವ ಹಾಗೆ, ಬೆಲೆಯ
ಕಟ್ಟಬರದ ಭೂಷಣಗಳ
ಸಿಟ್ಟು ದೇವಪಾದದಲ್ಲಿ
ಬಿಟ್ಟು ತಮ್ಮ ಹಮ್ಮು ಬಿಮ್ಮು
ಇದರ ಅಡಿಯ ಹುಡಿಗೆ ಸೋಂತು,
ಅದನೆ ತೊಡಿಗೆಯಾಗಿ ಆಂತು,

ನುಡಿಗು ನುಡಿಗು 'ಚೆನ್ನ, ಚೆನ್ನ'
ಎಂದು, ಹೊಟ್ಟೆ ಮಕ್ಕಳನ್ನು
ಇದರ ಹೆಸರಿನಿಂದ ಹರಸಿ
ಹರುಷಗೊಳ್ಳುತಿರೆ, ಅನಿಬರು
ಸೊಗವು ಇರಲಿ ದುಗುಡ ಬರಲಿ
' ಚೆನ್ನ ನಿನ್ನದದುವು 'ಎನುವ

ಅಸುವ ಕಂಡುಕೊಂಡು, ಶಾಂತಿ-
ತೀರ್ಥದಲ್ಲಿ ಮಿಂದರು;
ಅಚಲವಾದ ನಚ್ಚು ಮೆಚ್ಚು-
ಗೆಯಲಿ ಅವರು ನಿಂದರು.

# ಮುಪ್ಪು

ಮೂರ್ತಿಗಿಂತ ಪೂಜೆಯವರ
ಕೀರ್ತಿ ಮೇಲುಗೈಯು ಬರಬ-
ರುತ್ತ; 'ಹೊನ್ನು-ಮಣ್ಣು' ಎಂದು
ಜಪಿಸಿ ಜಪಿಸಿ ಮಣ್ಣಿನಷ್ಟು
ಹೊನ್ನ ಪಡೆದು, ಇನ್ನು ಬೇರೆ
ಚಿಂತೆ ತೊರೆದು, ದೇವರನ್ನು
ಹೊನ್ನಿನಲ್ಲಿ ಹುಗಿದು ಹೂಳಿ,
ಇವನ ಪೀಠವನ್ನು ತಾವೆ
ಏರಿ; ಬರುವ ಕಪ್ಪಕಾಣಿ
ಕೆಗಳ ತಮ್ಮ ದಕ್ಷಿಣೆಯನು
ಕಾಣುವಂತೆ ಕಂಡು, ತಮ್ಮ
ಮಂದಹಾಸ-ದೇವ ಕೃಪೆಯ
ಚಂದ್ರಕಲೆಯ-ಉದಿತೋದಿತ
ಕೀರ್ತಿ ಮುಖದ ಹಾಗೆ ಮೆರೆಸಿ,
ದುಃಖಿಗಳನು ದೂರವಿರಿಸಿ,
ಪಾಪಿಗಳನು ಹೇಳಿ ಕರೆಸಿ-

ವಾರವನಿತೆಯರ ವಿಲಾಸ
ಭವನದೊಂದು ಒಪ್ಪ ಗುಡಿಗೆ
ಹಾಕಿ, (ಕಳಸವಿಡಲೊ ಏನೊ!)
ಪಾಡ ತೋಡಿ ಕೊಳುವ ಹಾಡ
ಮೊಳಕೆ ಮೂಡದಂತೆ ಮಾಡಿ,
ತಮ್ಮ ದನಿಯ ಸಡಗರವನು

ಬೆಡಗಿನಿಂದ ಸಾರಿ, ಬೀರ
ಬರುವ ಗಾಯಕಿಯರ ಮೇಳ
ಆಸೆಗಣ್ಣ ಸಂತೆಗೀಸು
ಈಸು ಚೆಲುವ ಹಂಚುವಂತೆ
ಸೆರಗನತ್ತಲಿತ್ತ ಸರಿಸಿ,
ತೋಳು ಕೆಳಗೆ ಮೇಲೆ ಮಾಡಿ,
ಚೆಸ್ನಸಿಂದ ಜನರ ಮೊಗವ
ತಮ್ಮ ಕಡೆಗೆ ತಿರುಗಿಸುತ್ತ
ಕುಣಿಯುತಿಹುದು–ಕುಣಿಸುತಿಹುದು.

ಬೆಲೆಯು ತುಲೆಯ ತಳಿಗೆಯಲ್ಲಿ
ಎಡೆ–ಪ್ರಸಾದ ತೂಗುತಿಹುದು.
ಪೂಜೆಯನ್ನು ಹೊಂದತಕ್ಕ
ಪೂಜ್ಯ ವಸ್ತು ಶೂನ್ಯವಾಗಿ
ಕಣ್ಗೆ ಮಾಯವಾಯಿತು.

# ಮುಕ್ತಿ

ಮೂರ್ತಿಗಿಂತ ಮುಂದೆ ಇದರ
ಹೊನ್ನ ಕೀರ್ತಿ ಹಬ್ಬಿ, ಸುಲಿಗೆ
ಯವರ ಸೆಳೆಯುತಿತ್ತು; ಅಲಂ
ಕಾರ ಭಾರವನ್ನು ಹೊರುವ
ವಸ್ತುವಾಯ್ತು ಮೂರ್ತಿ; ಚಿನ್ನ
ದೆಷ್ಟೊ ತತ್ತಿಯಿಡುವ ಹಕ್ಕಿ
ಕಾಯುವಂತೆ ಕಾಯುತಿದ್ದ
ರರಸು ಒಡೆಯರಾಗಿ; ಇದನು
ಕೇಳಿ ಕೇಳಿ ಕೊಡತಿಯೊಡೆಯ
ಬಂದನೊಬ್ಬ ಹೊನ್ನು ಪಡೆಯ
ಲೆಂದು, ಮೂರ್ತಿ ಒಡೆಯಲೆಂದು.

ಚಿನ್ನ ! ನಿನ್ನದೇನು ಇಲ್ಲ ?
ಪೂಜಕರದೆ ನೀನು ಸೊತ್ತು.
ಅರಸಕಂಡ ಭವ್ಯಸ್ವಪ್ನ,
ಶಿಲ್ಪಿ ಹಡೆದ ದಿವ್ಯದೇಹ,
ಭಕ್ತರಿತ್ತ ಭಕ್ತಿವಿಭವ,
ಎಲ್ಲ ಮಣ್ಣುಗೂಡಿತಿಲ್ಲಿ.

ಪೂಜೆ ಮಾಡುವವರ ಪ್ರಾಣ
ಹೊನ್ನು, ಹೊನ್ನು, ಇನ್ನೂನು . . . . . . . .
ಗುಡಿಯನಾಳುವವರ ಪ್ರಾಣ
ಹೊನ್ನು, ಹೊನ್ನು, ಇನ್ನೂನೂ . . . . . . . .

ಕೊಡತಿಯೊಡೆಯ ! ಹೊನ್ನ ಸೆರೆಯ
ಬಿಡಿಸ ಬಾರೊ ಮೂರ್ತಿಗೆ.
ಮುಕ್ತ ಶಿಲೆಯು ಇರಲಿ ನೆಲೆಯು
ನಾಮಶೇಷಕೀರ್ತಿಗೆ !

# ಕೊನೆಯ ಹಾಡು

೧

ನನ್ನ ಹರಣ
ನಿನಗೆ ಶರಣ
ಸಕಲ ಕಾರ್ಯಕಾರಣಾ
ನಿನ್ನ ಮನನ
ದಿಂದ ತನನ
ಎನುತಿದೆ ತನು ಪಾವನಾ !

೨

ಸುಖದ ಮಿಷವು
ದುಃಖವಿಷವು
ಹಿಗ್ಗ, ಪ್ರಾಣ ಪೂರಣಾ !
ಪಂಚಕರಣ
ಗಳೀ ಗಡಣ
ಕಟ್ಟಿತು ಗುಡಿ ತೋರಣಾ.

೩

ನಿನ್ನ ಚರಣ
ಸುಸಂತರಣ.
ಜಗದ್ಭರಿತ ಭಾವನಾ !
ಹಾಸ್ಯಕಿರಣ
ತದನುಸರಣ
ತದಿತರ ಪಥ ಕಾಣೆ ನಾ.

೪

ಹರುಷರಸವೆ,
ಕರುಣದಸುಧೆ,
ಜೀವ–ಧರ್ಮ–ಧಾರಣಾ ;
**ರಸವೆ ಜನನ**
**ವಿರಸ ಮರಣ**
**ಸಮರಸವೇ ಜೀವನಾ !**

ಶ್ರೀ ಭದ್ರಂ ಶುಭಂ ಮಂಗಳಂ

# ಗಾರುಡಿಗ

ಇದು ಮಂತ್ರ; ಅರ್ಥಕೊಗ್ಗದ ಶಬ್ದಗಳ ಪವಣಿಸುವ ತಂತ್ರ;
ತಾನೆ ತಾನೆ ಸುಮರ್ಥಛಂದ; ದೃಗ್ಬಂಧ ದಿ-
ಗ್ಬಂಧ; ಪ್ರಾಣದ ಕೆಚ್ಚು ಕೆತ್ತಿ ರಚಿಸಿದೆ; ಉಸಿರ
ಹೆದೆಗೆ ಹೂಡಿದ ಗರಿಯು ಗುರಿಯು ನಿರಿಯುಟ್ಟು ಬರು-
ತಿದೆ ತೂರಿ ಲೀಲೆಯೊಲನಾಯಾಸ. ಗರುಡನಂ-
ತೆರಗಿ ಬಂದಿತು—ಭ್ರಮೆಯೊ? ಉನ್ಮಾದವೊ? ಸಂಜೊ? ಮರ-
ಣವೊ? ನಿದ್ದೆಯೋ! ಮೋಹನವೋ! ಎಚ್ಚರಕೆ ಕವಿದ
ಮರೆವೊ! ಕನಸೋ ನನಸು-ಎಲ್ಲ ಹಾಲೋಹಾಲು!

ಎಲೆಹಾವೆ! ಹೊಟ್ಟೆಹೊಸೆಯುವ ಜಂತು! ನಿನಗೆ ಕಿವಿ
ಯಿಲ್ಲ, ನಾಲಿಗೆಯೆರಡು, ಹಲ್ಲೊಳಿದೆ ವಿಷವು, ನಿ-
ಸ್ನಸ್ನ ಗಾಳಿಯು, ನೀನು ಪಾತಾಳಕಿಳಿದರೂ
ಮತ್ತೆ ಕಾಡುವೆ. ರಸಿಕನೆನೆ ಚಂದ ತಲೆದೂಗಿ
ನಾಳೆ ಕಾರುವೆ ಗರಳ! ಬಯಸುತಿರು, ಬಯಸುತಿರು . . . .
ಕಂಡಿಲ್ಲವೇನೊ ಅಂಗೈಯ ಗರುಡನ ಗೆರೆಯು!

# ‘ಕಾಮಕಸ್ತೂರಿ’

(ಒಂದು ಪ್ರಣಯಪ್ರಣಾಲಿಯಲಹರಿಲಹರಿ)

# ಹೇಳಬೇಕಾದ ಮಾತು

ಮುಂದಿನ ೧೫-೧೬ ಕವನಗಳು ಒಂದೇ ಕಾಲಕ್ಕೆ ಬರೆದುವಲ್ಲ. ಒಂದೇ ತರಂಗಲಹರಿಯಲ್ಲಿ ಬರುವ ಜಾತಿಯವು. ರಸಿಕರು ಕಲ್ಪನೆಯಿಂದ ಅದರ ಸುತ್ತು ಕತೆ ಕಟ್ಟಬಹುದು—ಅವರವರಿಗೆ ರುಚಿಸುವಂತೆ. ಕಾಮವೂ ಕಸ್ತೂರಿಯಂತೆ ಒಕ್ಕಾಲು ಮದ, ಮುಕ್ಕಾಲು ಮಣ್ಣು ಆದರೂ ಮಗಮಗಿಸುವ ಸವಿಗಂಪು. ಕಾಮ-ಪ್ರೇಮ ಕೆಸರು-ಕಮಲ ಇದ್ದಂತೆ. ಒಂದು ವಾಚ್ಯ ಒಂದು ಧ್ವನಿ-ಕಾವ್ಯದ ಭಾಷೆಯಲ್ಲಿ.

ಇವೆಷ್ಟೋ ಏಕತಾರಿಯ ಜೊತೆಗೆ ಹೇಳಬೇಕಾದುವು. ಇವು ಅನುಭಾವ ಪದಗಳಲ್ಲ. ಈ ಅನುಭಾವ ಬೇರೆ. ಪ್ರಾಯದವರಿಗೆ ಹೇಳಬೇಕಾಗಿಲ್ಲ. ಪ್ರಾಯ ಮೀರಿದವರಿಗೆ ಹೊಸದೇನು? ಎಲ್ಲರಿಗೂ ಒಂದಿಲ್ಲೊಂದು ರೀತಿಯಲ್ಲಿ ರುಚಿಸುವದೆಂದು ಆಶಿಸಿದ್ದೇನೆ.

—ದ. ರಾ. ಬೇಂದ್ರೆ

ಕಾಮುಕಸ್ತೂರಿ

# ಪರಿವಿಡಿ

# ಹರಕೆ

ಮಂದಗತಿ ಮಂದತರವಾಗಿ ಬಿಟ್ಟಿದೆ; ಹುಲ್ಲೆ-
ಗಂಗಳೊಳು ಚಂಚಲತೆ ಕುಡಿಯೊಡೆಯಲಿದೆ; ಉಡುಗಿ
ಮೈನಯದ ನೆಯ್ಗೆ ತೊಪ್ಪಲು; ಹರೆಯ ಚಿಗುರಡಗಿ
ನೆತ್ತರದ ನೆರೆಗಂಪು ಹಳಸುತಿದೆ ಭರದಲ್ಲೆ.

ಹಾರುಹಕ್ಕಿಯ ಪುಚ್ಛವೆಣಿಸಲೆಳಿಸಿದ ಬೆಡಗಿ!
ವಿಜಯವಿಠ್ಠಲನ ಗುಡಿ ಭಣಗುಡುವ ತೆರದಲ್ಲೆ
ಹರುಹಲಿರುವೆದೆ ಬರಿದೊ ಬರಿದು; ಮಿದುಸವಿಸೊಲ್ಲೆ
ಹುಟ್ಟದಿದೆ; ಕೈನೀಡಿ ಬೆಳೆದು ನಿಂತಿಯೆ ಹುಡುಗಿ.

ದಿನದ ಗಣಿವನು ಕಳೆಯೆ ತಂಗಿ ಹಾರುವ ಹಕ್ಕಿ
ಎರಗದಿರಲಿಲ್ಲಿ. ಕಟ್ಟಾಡಿಸಲು ಬರದಿರಲಿ
ಹುಡುಗಗಾಳಿ. ಅನಾದಿವಂಶದಾ ವೈಭವೋ-
ದಯವ ಮೂಸಿಸಿ ದುಂಬಿ ಬರದಿರಲಿ. ನವನವೋ-
ನವ ಮನೋರಥ ಸಫಲ ಪೊಸ ಬಸಂತನೆ ಬರಲಿ.

# ವಾರಿನೋಟ

(ಹೊಳೆಯ ಮೇಲೆ)

ವಾರಿನೋಟ ಹಾರತಿತ್ತೋ ಹೊಳಿವ್ಯಾಗ
ಹೊಸಾ ಹರೆ ಈಸತಿತ್ತೋ ಹೊಳಿಯಾಗ ॥ ಪಲ್ಲ ॥

೧

ಒಂದು ಬಳ್ಳಿ ಹೂಬಿಡಲಿತ್ತೋ ಹೊಳಿವ್ಯಾಗ
ಗಾಳಿಯೊಂದು ಸುಳಿದಾಡತಿತ್ತೋ ಹೊಳಿಯಾಗ

೨

ಸೂಜಿಗಲ್ಲು ತಿರುಗತಿತ್ತೋ ಹೊಳಿವ್ಯಾಗ
ಸೂಜಿಯೊಂದು ತೇಲತಿತ್ತೋ ಹೊಳಿಯಾಗ

೩

ಸೆರಗು ಒಂದು ಅಲೆದಾಡತಿತ್ತೋ ಹೊಳಿವ್ಯಾಗ
ಬೆರಗು ಒಂದು ಸಲಿದಾಡತಿತ್ತೋ ಹೊಳಿಯಾಗ

೪

ತುಂಬಿಯೊಂದು ಹಾಡತಿತ್ತೋ ಹೊಳಿವ್ಯಾಗ
ತಾವರ್ಯೊಂದು ಬಾಯ್ಬಿಡತಿತ್ತೋ ಹೊಳಿಯಾಗ

## ಕಾಮಕಸ್ತೂರಿ

(ಹೊಲದ ಹತ್ತರ)

ತಂದೇನಿ ನಿನಗೆಂದ
ತುಂಬಿ ತುರುಬಿನವಳ,
ಕಾಮಕಸ್ತೂರಿಯಾ
ತೆನಿಯೊಂದ.

ಅದನ್ನ ನೀ ಮುಡಿದಂದ
ಮುಡಿದಂಥ ಮುಡಿಯಿಂದ
ಗಾಳಿಯು ಸುಳಿಯೊಂದ
ಬಂದೆನಗ ತಗಲಿದಂದ
ತಣಿತಣಿತಣಿವಂದ
ಈ ಮುಸಕ.

ಅನ್ನೋ ಜನರು ಏನು
ಅಂತ್ನನ ಇರತಾರ
ಹೊರತಾದೆ ನೀ ಜನಕ.

# ಬಡವರ ಮಗಳು

(ಹಾಡಿಪಲ್ಲಿ)

ಬಡವರ ಮಗಳಾಗಿ ನೀನು
ಸಡಗರ ನಿನಗೆಷ್ಟ
ಬಡಿವಾರ ನಿನಗ್ಯಾಕ

ಬಿಸಿಲು ಹಬ್ಬಿ ಗಾಳಿಯು ಹರಡಿ
ಮುಗುಳು ನಗೀ ಅರಳಿಸಲೊಲ್ಲಿ
ಎವಿಯಿಕ್ಕದೆ ದಿಟ್ಟಿಸಿದರೂ
ಉಗುರದಿಟ್ಟಿ ಇಟ್ಟ ನಡೆದಿ

ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದೂ ಮುಗ್ಗಿಯೆ ಇರುವಿ
ಕಣ್ಣುಮುಚ್ಚಿ ನಿನ್ನ ನೆನೆದೇ
ಎದೀ ಮುಗುಳು ತೆರೆಯಲೊಲ್ಲಿ

ಬಂಗಾರದ ಮಾಟದಿಂದ
ಸಿಂಗಾರದ ಮಳೆಗರಸೇನ
ಹ್ಯಾಂಗಾರ ಕಣ್ಮನಸೆತ್ತಿ
ಒಮ್ಮೆ ನೋಡ ಒಮ್ಮೆ ನೋಡ.

# ನನ್ನವಳು

(ನಸುಕಿನ ಝುಳುಕು)

೧

ತಂಬುಲದ ತುಟಿಯು ತೋರಿ
ಮಲ್ಲಿಗೆಯು ಮುಡಿದುಕೊಂಡು
ಮೆಲ್ಲಗಾಗಿ ಬರುವವಳ್ಯಾರಽ ?
ಸಂಜೆ ಏನಽ ?

೨

ನೀಲಸೆರಗು ಮೆಲ್ಲಗ ಸರಿಸಿ
ವಾರಿನೋಟ ಮೇಲಕ್ಕೆತ್ತಿ
ಮಳ್ಳಿಯಂತೆ ಮುರುಕುವಳ್ಯಾರಽ?
ಇರುಳು ಏನಽ?

೩

ಅಲೆದುಗಿಲಿದು ಉಲಿದೂ ಉಲಿದೂ
ನೆಟ್ಟ ನೋಟಾ ಕೀಳಲಾರ್ದಽ
ತಣ್ಣಗಾಗಿ ನಿಂತವಳ್ಯಾರಽ?
ನಸುಕು ಏನಽ?

೪

ಹೊತ್ತೊತ್ತಿಗೆ ಹೊಂದಿಕೆಯಾಗಿ
ಹಲವಾದಿ ಒಬ್ಬಾಕೆಯಾಗಿ
ಹೌದ ಚನ್ನಿ ಹೌದಽ ಚೆಲುವೀ !
ನನ್ನವಳೇನಽ?

# ಅವನು-ಅವಳು

(ಗುರುತು)

ಅವಳು:—ನೀನು ಹೊರಟಿರುವದೆತ್ತ ?
ಅವನು:—(ಬರಿ ಸನ್ನೆಯಿಂದ) ಇತ್ತ—
'ಳು:—ಈ ಹಾದಿ ಮುಗಿದುದೆಲ್ಲಿ ?
'ನು:—(ಬರಿ ಸನ್ನೆ) ಅಲ್ಲಿ—
'ಳು:—ಬುತ್ತಿ ಕೂಡಿಲ್ಲವಲ್ಲಾ ?
'ನು:—(ಬರಿ ಸನ್ನೆ) ಇಲ್ಲಾ—
'ಳು:—ಜೊತೆಗಿತೆಗೆ ಬೇಡವೇನು ?
'ನು:— ಏನು ?

ಅವನು:—ಗೊತ್ತುಗುರಿಯೇಕೆ ಬೇಕೋ ?
ಅವಳು:—(ಬರಿ ಸನ್ನೆ) ಏಕೋ !
'ನು:—ಬರುವೆಯಾ ನೆರಳ ಹಾಗೋ ?
'ಳು:—(ಬರಿ ಸನ್ನೆ) ಹೇಗೋ !
'ನು:—ನನ್ನೊಳನುರಾಗಿ ನೀನೋ ?
'ಳು:—(ಬರಿ ಸನ್ನೆ) ಏನೋ !
'ನು:—ನಿನಗೆ ಬೇಕಾದುದೇನೇ ?
'ಳು:—(ಬರಿ ಸನ್ನೆ) ನೀನೇ !

# ಕತ್ತಲೋ ಕತ್ತಲು

(ಇಬ್ಬರಲ್ಲಿ)

ನಿಶೆಯುಲ್ಲೊ ಎಲ್ಲೆಲ್ಲು । ರವಿಯುಲ್ಲೊ ಶಶಿಯುಲ್ಲ ॥
ತೇಜಗಳ ತುಣುತುಣುಕು । ಮಿಂಚುಹುಳ ಮಿಣುಮಿಣುಕು ॥
ಝುಳುಕುಯಿದೆ ತುಳುಕುತಿದೆ । ಥಳಕಿದ್ದು ಬೆಳಕಿಲ್ಲೋ ॥
ಕಣ್ಣಿನಾ ಹಡಗಲು । ಬೆಳಕನ್ನು ಪಡೆಯುಲು ॥
ಹೊರಟಿಹುದು ಹುಡುಕಲು । ಯಾವ ನಡುಗಡ್ಡೆಯುಲೊ ॥
ಅದರಾಚೆ ದಂಡೆಯುಲೊ । ಕತ್ತಲಿನ ಕಡಲಲು ॥
ಎತ್ತಲೂ ಕತ್ತಲು । ಎಲ್ಲಿಹುದು ಬಡಗಲು ॥
ಮುಗಿಲಿನಲಿ ಮೋಡಗಳು । ಕತ್ತಲೋ ಕತ್ತಲು ॥
ದೀಪದ ಬುಡದಲು । ಅಲ್ಲಿಯೇ ಪಡೆದೊಲು ॥
ಕಣ್ಣಿದ್ದು ಕಾಣದೊಲು । ಚಿಕ್ಕೆಗಳ ಸುತ್ತಲು ॥
ಮುಗಿಲಿನಾ ಮೊಗದಲು । ನಿದ್ದೆ ಹೋದವರೊಲು ॥
ಚಿಂತಿಸುವ ಚಿತ್ತದಲು । ಗುರಿಯಿರದ ಬಾಣದೊಲು ॥
ಎತ್ತಲೋ ಎತ್ತಲು । ಮುಂಗುರುಡ ಮನದೊಲು ॥

ಕತ್ತಲೋ ಕತ್ತಲು.

# ಬರಿಗೊಡದ ಬಾಲಿ

(ಅಗಲಿಕೆ)

೧

ಬರಿಗೊಡದ ಬಾಲಿ ಕೊಡನ್ಯಾಕ ತುಂಬಿಲ್ಲ
ದಡದಾಗ ನಿಂತ್ಯೆ ಸುಮ್ಮನೆ ಕೋಲ
ದಡದಾಗ ನಿಂತ್ಯೆ ನಿನಗ್ಯಾಕೀ ಚಿಂತೆ
ಜನುಮಕ ಬಂದು ದಿನವೇಸ ಕೋಲ

೨

ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೊ
ಮೊಲಿಹಾಲ ಕುಡಿದು ದಿನವೇಸ ಕೋಲ
ಮೊಲಿಹಾಲ ಕುಡಿದು ದಿನವೇಸ ತಂಗೆವ್ವ
ಹುಡಿಯಾಟವಾಡಿ ದಿನವೇಸ ಕೋಲ

೩

ಪಿಸಿಪಿಸಿ ನಕ್ಕು ಹುಸಿಹುಸಿ ನಾಚಿ
ಹುಡದೀಯ ಬಿಟ್ಟು ದಿನವೇಸ ಕೋಲ
ಹುಡದೀಯ ಬಿಟ್ಟು ಅಡಿಗಡಿ ಮುರಕದ
ನಡಿಗೀಯ ಹಿಡಿದು ದಿನವೇಸ ಕೋಲ

೪

ಬೆನ್ನೀಗೆ ಕೂದಲು ಬೀಸಾಗಿ ಕುಣಿದಾಡಿ
ಕೆನ್ನೀಗೆ ಕುರುಳು ಮುತ್ತಿಟ್ಟು ಕೋಲ
ಕೆನ್ನೀಗೆ ಕುರುಳು ಮುತ್ತಿಟ್ಟು ದಿನವೇಸು
ಹೆಡಮುಡಿ ಬಿಗಿದ ಹೇಳಲ್ಯಾಕಿ ಕೋಲ

೫

ದಿಟ್ಟನ್ನ ಮಾತಾಡಿ ದಿಟ್ಟೀಸಿ ನೋಡಿ
　　ದಿಟ್ಟಿಯು ತೆಗೆದು ದಿನವೇಸ ಕೋಲ
　　　　ದಿಟ್ಟಿಯು ತೆಗೆದು ದಿನವೇಸು ಆದಾವು
　　　　　　ದಟ್ಟಿಯು ಉಟ್ಟು ದಿಟ ಹೇಳ ಕೋಲ

೬

ಆಟದ ಗೊಂಬಿ ಮಗಳೆಂದು ನಂಬಿ
　　ಮಗ್ಗುಲದಾಗ ಮಲಿಗೀಸಿ ಕೋಲ
　　　　ಮಗ್ಗುಲದಾಗ ಮಲಗೀಸಿ ಮುದ್ದಿಟ್ಟು
　　　　　　ಹಿಗ್ಗಿಗ್ಗಿ ಕುಣಿದ ವರಸೇಸ ಕೋಲ

೭

ಕೆಲಬಲದಾಗ ಕುಣಿಕುಣಿವ ಕಣ್ಣು
　　ಎದಿ ಬದಿಬದಿಗೆ ಹುಡುಕಾಡಿ ಕೋಲ
　　　　ಎದಿ ಬದಿಬದಿಗೆ ಹುಡುಕಾಡಿ ದಣಿದು
　　　　　　ತಲೆಬಾಗಿ ಏಸು ತಿಂಗಳ ಕೋಲ

# ನೀರಿಗೆ ನಡೆದಾಗ

೧

ನೀರಿಗೆ ನಡೆದಾಗ ಸೀರಿಗಿ ಚೆಲ್ಲಾಟ
ನೀರೆ ಸೀರಿಲೆ ಬರುವಾಗ ಕಣ್ಣೀನ
ನೀರು ಇಳಿದಾವೊ ಗಲ್ಲಕ್ಕ

೨

ನೀರಾಗ ನಿಂತಾಗ ನೆರಳ ನೋಡುವ ನಾರಿ
ಎರಳೆಗಂಗಳ ಎವೆ ನಿಲಿಸಿದೆಡಬಲದ
ಕಣ್ಣಾಗ ನಿನ್ನ ಕರಿಗೊಂಬ

೩

ಹರೆಯೊಂದು ಹರಿನೀರ ತೆರೆಯೊಂದು ಕರಿನೀರ
ಹರದಿ ನಿನ್ನೆದೆಯು ಮುನ್ನೀರ ಜನುಮಾವ್ರ
ಹರಿಗಡಿಯುವಂಥ ಹೊಳೆನೀರು

೪

ತಾವರಿ ಹೂವಾಗಿ ಯಾವರಿಗರಳಿತ್ತೊ
ಆವರಿಗೆ ತುಂಬಿ ತುಂಬ್ಯಾವ ಹಾಡುತಲೆ
ತಾವ್ಯಾರೊ ಎಂದು ತೆರಳ್ಯಾವ

೫

ಹರಿವಗಂಗೀ ನೆರಿಗೆ ಹರಿಸೀದೆ ಕಣ್ಣೀರು
ಹರಹರ ಎಂದು ಹೊಳೆ ತೋರಿ ಮೊರೆದಾಗ
ಹರನೆ ಕಿವಿಗೊಡುವ ದುಃಖಕ್ಕ

# ಅಕ್ಕರತಿ

ಗಳಗಳ ಗಾಳಿಯು ಜಳಜಳ ನೀರಾಗ
ಸುಳಿಸುಳಿದು ಬಂದು ನೀರಾಟ ಆಡುತಲಿ
ಒಲಿದೊಲಿದ ನೀರು ತೆರಿತೆರಿ ೧

ಜಿನುಗುಮೀನದ ಜಾತ್ರಿ ಜರತಾರಿ ರೇಸಿಮಿ
ಜರದಡ್ಡಂಗಂಚೀಲೆ ನೆರೆದಾವ ಕರದಽರ
ಹರಿದು ನೀರಾಗ ಸರದಾವ ೨

ಹುಳಹುಪ್ಪಡೆಂತಂದು ಹೀಗಳಿಗಳಿದಿಲ್ಲ
ಹೂವು ಹೂವಿನ ಒಟ್ಟಲ ಜೇನಿಲೆ
ಹರತಂದಿ ತುಂಬಿ ಇಟ್ಯಾನ ೩

ಚಿಕ್ಕಮುರಿಗೆ ತನ್ನ ರೆಕ್ಕಿ ಬೀಸಣಿಕೀಲೆ
ಅಕ್ಕ ಜಳಕಕ್ಕ ಹಾಕ್ಯದ ನೋಡವ್ವ
ಹಕ್ಕಿ ಜಾತ್ಯಾನ ಅಕ್ಕರತೆ ೪

ಅಂತರಗಂಗೀವ್ಯಾಗ ಕುಂತ ಹಕ್ಕೀಜೋಡ
ಅಂತಃಕರಣವ ನೋಡೇನ ಅಗಲುತಲೆ
ಅಂತರಕೀಲೇನ ಕೂಗ್ಯಾವ ೫

# ಜನುಮದ ಜಾತ್ರಿ

ನೇತ್ರಪಲ್ಲವಿಯಿಂದ ಸೂತ್ರಗೊಂಬೀ ಹಾಂಗ
ಪಾತ್ರಕುಣಿಸ್ಯಾನ ಒಲುವಿನಾಗೆ ದಿನದಿನ
ಜಾತ್ರಿಯೆನಿಸಿತ್ತ ಜನುಮವು ೧

ಹುಬ್ಬು ಹಾರಿಸಿದಾಗ ಹಬ್ಬ ಎನಿಸಿತು ನನಗ
'ಅಬ್ಬ' ಎನಬೇಡಽ ನನ ಗೆಣತಿ ನಾಚಿಕ
ಒಬ್ಬ ನೋಡವ್ವ ನನ ನಲ್ಲ ೨

ಕಣ್ಣೆವಿ ಎತ್ತಿದರ ಹುಣ್ಣೀವಿ ತೆರಧಾಂಗ
ಕಣ್ಣು ವಸಂತ ಬಣ್ಣಿಸಲೆ ಚಿತ್ತಕ್ಕ
ಕಣ್ಣು ಬರೆಧಾಂಗ ಕಂಡಿತ್ತು ೩

ಹೇಸಿರಲು ಈ ಜೀವ ಆಸಿ ಹುಟ್ಟಿಸುತಿತ್ತು
ವಿಲಾಸಿ ಮೋಲೆಳೆದ ಕಿರಿಬೆರಳು ಕೆಂಗಯ್ಯು
ಬೀಸಿ ಕರೆದಾನ ನನಗಂತ ೪

ತಂಬುಲತುಟಿ ನಗಿ ಹೊಂಬಿಸಿಲೆಂಬಂತೆ
ಬಿಂಬಿಸಿತವ್ವಾ ಎದಿಯಾಗ ನಂಬೀಸಿ
ರಂಬೀಸಿತವ್ವಾ ಜೀವನ ೫

## ಒಲುಮೆಯ ಕಿಚ್ಚು

೧

ನೀರಸ ನೋಟಕ್ಕ ನೀರುಕಡೆದಿತು ಜೀವ
ಧೀರ ಧೈರ್ಯಾವ ಕಳೆದಾನ ನನ್ನೊಂದ
ತೀರ ಮುರಳಿಯ ಮಾಡ್ಯಾಸ

೨

ಸುಗ್ಗಿ ನಗಿ ನಕ್ಕಾಗ ಮೊಗ್ಗಿ ಬಿಚ್ಚಿತ ಒಳಗ
ಹಿಗ್ಗಿ ಹಾಡಾಗಿ ಮಾಗಿಸಿತು ಹರೆಯವು
ಬಗ್ಗದ ಎದೆಯ ಬಾಗಿಸಿತು )

೩

ಮಾಗಿ ಮೂಡಲಗಾಳಿ ತಾಗಿದ ಬನಹಾಂಗ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರಽ ಸುಗ್ಗಿಯಾ

೪

ಆಡಿ ಜೀವದಗಾಣಾ ನೋಡ ಹಿಂಡಿತು ಪ್ರಾಣಾ
ಕಾಡತಾನ್ಯಾಕಽ ಆ ಜಾಣ ಕೇಳಿಲ್ಲ
ಹಾಡು ತಲ್ಲಣದ ತಿಲ್ಲಾಣ

೫

ಬಾತುಗೋಳಿ ಹಾಂಗ ಚಾತಕದ ಜಾತ್ಯಲ್ಲ
ನಾತನೀರಾಗ ಆದರಾಟ, ಇದರೂಟ
ಪಿಪಾಸಲಳಿಯದ ಮಳಿಯಾಗ

೬

ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲುಜೀವ ಕಾಡು ಕಮರೀತು ಒಳುಜೀವ
ಒಲುಮಿಗೆ ಹ್ಯಾಂಗೊ ಬಾಳೀತು

# ಗಿಣಿ ಹೇಳ !

ಕವಳ ಮೆಲ್ಲುವ ಬಾಯ ಹವಳತುಟಿ ಹಿಂಡುತ್ತ
ನಿವಳ ನಿಂತಾಳ ನಿಲಿಪಿಲಿ, ಗಿಣಿ ಹೇಳ
ಇವಳ ಮನಸೆಲ್ಲಿ ಇರಬಹುದು ೧

ಅಚ್ಚವಳ ಹಲ್ಲೀಗೆ ಸರಿಮುಚ್ಚು ಮಲ್ಲಿಗೆ
ನಿಚ್ಚ ನಿರಂತರ ಇದು ಸುಗ್ಗಿ, ಗಿಣಿ ಹೇಳ
ಬಿಚ್ಚಿದವ ಏನು ಬಾಡಿದವ ೨

ಕಾಡಿಗೆಗಣ್ಣಿಗೆ ಕಾಡಿಗೆ ತೀಡ್ಯಾಳ
ಕಾಡಿನ ಕಡೆಗೆ ಕಣ್ತಿರುವಿ, ಗಿಣಿ ಹೇಳ
ಹಾಡಿಗೆ ಒಂದಳಿವಳೇನು ೩

ಕಾಂತಾರಕ್ಹೋಗ್ಯಾನ ಕಾಂತಾ ನಿನ್ನವನೇನ
ಕಾಂತೆ ಏಕಾಂತ ಬಯಸಿದೆ, ಗಿಣಿ ಹೇಳ
ನಿಂತಾಳ ಕಾದು ನಿನಗಾಗಿ ೪

ಪರುಶ ಕಬ್ಬಿಣಕ್ಕ ಸ್ವರುಷ ಮಾಡಿಧಾಂಗ
ಪುರುಷನ ಧ್ಯಾನ ಸರಸಿಗೆ, ಗಿಣಿ ಹೇಳ
ಹರುಷ ರೋಮಾಂಚ ತಳೆದಾಳ ೫

# ಕಂಡತಪ್ಪು

ಒಂದಕ್ಷಣಾ ಕಂಡ ತಪ್ಪಿಗೆ — ಎಂದಿನತನಕಾ ಕೊರಗೋದs (?)
— ಕೊರಗೋದs ಮತ್ತ ಸೊರಗೋದs

ಕಂಡರೂಪ ಕಂಡರಿಸುತ್ತಾ — ಕಂಡಕಡೆಗೂ ಕೂಡೋದs (?)
— ಕೂಡೋದs ಮತ್ತ ನೋಡೋದs

ಕನಸಿನೊಳಗೂ ಕಂಡಂತಾದರು — ಕಂಡ್ಹಾಂಗs ಕನವರಸೋದs (?)
— ವರಸೋದs ಮತ್ತ ಬೆರಸೋದs

ಬೆಚ್ಚಿ ಎಚತ್ತಾಗ ಕನಸಿನ — ಕನಡಿಯು ನೆರಳ ನೆನಿಯೋದs (?)
— ನೆನಿಯೋದs ಮತ್ತ ಮುನಿಯೋದs

ಕಂಡಕಣ್ಣಲೆ ಕಣೀರ್ ಸುರಿಸಿ — ನೆನೆವ ನೆನಪಿಗೆ ಬಯ್ಯೋದs (?)
— ಬಯ್ಯೋದs ಮತ್ತ ಸುಯ್ಯೋದs

ಬೆಳೆವಬದುಕಿಗೆ ಬಾಯಿಬಿಟ್ಟು — ಸುಟ್ಟ ದೈವಕ ನೋಯೋದs (?)
— ನೋಯೋದ ಮತ್ತ ಸಾಯೋದs

ಅದನೂ ಕಾಣದ ಬಾಳೂ ಕೀಳು — ಸಾವs ಮೇಲು ಅಂದೇನs (?)
— ಅಂದೇನs ಮತ್ತ ಮುಂದೇನs

ಒಂದಕ್ಷಣಾ ಕಂಡ ತಪ್ಪಿಗೆ
ಎಂದಿನತನಕಾ ಕೊರಗೋದು

# ಚಿತ್ರ

ಕೈಗಲ್ಲ.............
(ಬಳಿಯಲ್ಲಿ ನಲ್ಲನಿಲ್ಲ !)

ಹುಬ್ಬುಗೈಯ್ಯು ......
(ಕಾಣುವುದೆ ದೂರ ಮೈಯ್ಯು !)

ಗದ್ದ ಬೆರಳು ........
(ಕಂಡಳೇನಲುಮದಿರುಳು !)

ತೆರೆದ ತೋಳು ......
(ಒಂದಾದವೆರಡು ಹೋಳು !)

ನಗುವು ಚಿಕ್ಕು ......
(ಒಲುಮೆಯಲಿ ಹಾಸುಹೊಕ್ಕು !)

# ಸಂಸಾರ

ಹುಡುಕ್ಯಾನ ಹಿಗ್ಗಿನಾ ದಾರಿ, ಹುಡುಗ ಸುಖದುಃಖ ಸಾಗರಾ ಸೇರಿ
ಮದುವೀಯ ಹಡಗವನ್ನೇರಿ
ಹುಡುಕ್ಯಾನ ಹಿಗ್ಗಿನ ದಾರಿ ॥ ಪ ॥

ಪೌರಾಣಿಕ:—

“ ಥೀಮಾರಿ ಪುರಾಣದ ಕಥೀ ಏನು ಸತಿಪತಿಗೆ ಸುಗ್ಗಿದಾ ಗತಿ
‘ ಸುಟ್ಟು ಬೂದಿಕಾಮ ’ ಅಂತ ಕೇಳಿ
ಅಳತ ಅದ ಗಾಳಿ
ಸುಗ್ಗಿಯೆಡೆ ಸೀಳಿ
ನಾ ನಿನಗ ಕಾಮನ ಮೂರ್ತಿ ನೀನು ನನ ಪೂರ್ತಿ ರತೀಯೋ ಸತಿ
ಥೀಮಾರಿ ಪುರಾಣದ ಕಥಿ ” ೧

ಕಾವ್ಯರಸಿಕ:—

“ ಏನೈತಿ ಸುಗ್ಗಿಯಾ ಹುರುಡು—ಯಾಕ ಉಳಿದೆಲ್ಲ ತಿಂಗಳಾ ಬರಡು
ಬೇಕ್ಯಾಕ ಮಾವಿನ ಕಾಡು
ಕೋಗಿಲದ ಹಾಡು
ಅಗಲಿಕಿ ಕೇಡು
ನಿನ ತೆಕ್ಕಿಯೊಳಗ ಸಿಕ್ಕೈತಿ ಸುಗ್ಗಿ ಸ್ವರ್ಗಕ್ಕ ಸಾಕು ತೋಳೆರಡು
ಏನೈತಿ ಸುಗ್ಗಿಯಾ ಹುರುಡು? ” ೨

ವ್ರತಿ:—

“ನಿನಸ್ಪರ್ಶ ಹರ್ಷದಾ ಚಿಲುಮಿ—ಅಲ್ಲಿ ನೀರಾಟವಾಡತದ ಒಲುಮಿ
ನೀನಂತಿಯಂತ ನಾ ನೀರ
ನೀನ ಆಹಾರ
ಮತ್ತ ನನ ನೀರ
ಗಾಳಿಗೆ ಬೀರಿ ಮೈಸೊಂಕಿ ಹೊತ್ತಿತ್ತ ಬೆಂಕಿ ಕಮ್ಮಾರನ ಕುಲುಮಿ
ನಿನ ಸ್ಪರ್ಶ ಹರ್ಷದಾ ಚಿಲುಮಿ” ೩

ಕೌಟುಂಬಿಕ:—

“ಮಕ್ಕಳ ಮಾಣಿಕದಕಣಿ ಸಿಕ್ಕಿ ನೀ ಚೊಕ್ಕ ಚಿಂತಾಮಣಿ
ಮಾತೆಲ್ಲ ಮುತ್ತಿನ ಎಳಿ
ಜೇನಿನ ಥಳಿ
ಹಿಗ್ಗಿನ ತೊಳಿ
ಮುಂಗಯ್ಯವಸ್ಸಾಲೆ ಮುದ್ದುಂಡು ಬೀರತಾವ ಮುದ್ದುಮಾತಿನ ಗಣಿ
ಮಕ್ಕಳ ಮಾಣಿಕದಕಣಿ” ೪

ಕನಸಿಗ:—

“ನಾ ಕಂಡ ಬೆಳಕಿನ ಹಣ್ಣ ನೀನು ನೀನಲ್ಲ ಚಿತ್ರದ ಹೆಣ್ಣ
ನನಗ್ಯಾಕ ಹುಬ್ಬಿನ ಡೊಂಕ
ಎವೆಗಳ ಬಿಂಕ
ಕಣ್ಣುಗಳ ಸುಂಕ
ನನ ಚಿತ್ತದಾಗಿನ ಚಿತ್ರಗಾರ ಬರೆದಾನ ಚಿತ್ತಕ ಕಣ್ಣ
ನಾ ಕಂಡ ಬೆಳಕಿನ ಹಣ್ಣ” ೫

ಮುಗಿತಾಯ:—

ನೆರಿತಽದ ಚಿಕ್ಕಿಗಳ ಜಾತ್ರಿ ಮುಗಿಲಿನ್ಯಾಗ ದಿನದ ದೇವರ ಯಾತ್ರಿ
ಮನಿಮನಿಗೆ ಜೋಡಿಯ ಚಿಟ್ಟಿ
ಸೈಯು ಮನಸಮುಟ್ಟಿ
ಜೇನಹುಟ್ಟ ಕಟ್ಟಿ
ಅಮೃತಂತ ಬಾಯಿ ಚಪ್ಪರಸತಾವ ಕೇಳಿ ಕಣ್ಣ ಮಿಟಕತದ ರಾತ್ರಿ
ನೆರಿತಽದ ಚಿಕಿಗಳ ಜಾತ್ರಿ ೬

# ತಪ್ಪು ಒಪ್ಪೋಲೆ

(ದಯವಿಟ್ಟು ತಪ್ಪುಗಳನ್ನು ತಿದ್ದಿಕೊಂಡು ಆಮೇಲೆ ಓದಬೇಕು)

| | ಪುಟ | ಸಾಲು | ತಿದ್ದುಪಡಿ |
|---|---|---|---|
| ಕವನಸಂದರ್ಭ | | ೧೮ | ಪೂರ್ಣವಿರಾಮ ಬೇಡ |
| ಪ್ರಳಯ ಸೃಷ್ಟಿ | | ೮ | ಒರಿಬಯಲನಿರ್ವಚನ (ಅನಿರ್ವಚನ) |
| **ಮೂರ್ತಿ** | ೫ | ೬ | ಮೊಗ್ಗ |
| ,, | ೬ | ೧೨ | ಒಲಿತು |
| ,, | ೮ | ೧೨ | ಪಡೆದಭಂಗ (ಅಭಂಗ) |
| ,, | ೧೨ | ೧೩–೧೪ | ಭೂಷಣಗಳನಿಟ್ಟು |
| ,, | ೨೦ | ೨ | ಸಮರ್ಥ |

**ಕಾಮುಕಸ್ತೂರಿ**

(ಹರಕೆ) ೧೩ ನೆಯ ಸಾಲು ಹೀಗಿರಬೇಕು:—

ದಯನ ಮೂಸಿಸಿ ಬಿಡುವ ತುಂಬಿ ಬರದಿರು. ಸವ್ರೋ–

೧೫ ನೆಯ ಸಾಲು ಬಿಟ್ಟು ಹೋಗಿದೆ. ಅದು ಹೀಗಿರಬೇಕು:–

ನಿನಗೆ ಕಾವಲವಿರಲಿ ನಿನ್ನ ಚಂದ್ರಮ ಚಿಕ್ಕಿ

| | ಪುಟ | ಸಾಲು | ತಿದ್ದುಪಡಿ |
|---|---|---|---|
| ,, | ೩ | ೯ | ಬಂದು |
| ,, | ೮ | ೬ನೆಯ ನುಡಿ ೪ನೆಯ ಸಾಲು | ಕುಣಿದು |
| ,, | ೯ | ೫ನೆಯ ನುಡಿ ೨ನೆಯ ಸಾಲು | ತೊರಿ |
| ,, | ೧೪ | ಪ್ರಶ್ನಾರ್ಥಕ ಚಿಹ್ನಗಳು ತಪ್ಪು ಬಿದ್ದಿವೆ. | |

ನುಡಿ ನುಡಿಯೊಳಗಿನ ಎರಡನೆಯ ಚರಣ ಎರಡು ಸಲ ಹೇಳಬೇಕು.

| | ಪುಟ | ಸಾಲು | ತಿದ್ದುಪಡಿ |
|---|---|---|---|
| ,, | ೧೫ | ೬ | ಗದ್ವಬೆರಳು |
| ,, | ೧೬ | ೧೦ | ಹುರುಡ |
| ,, | ೧೮ | ೬ | ಚಿಕ್ಕಿಗಳ |